ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯದ ಬೇಡಿಕೆ ಬಗ್ಗೆ

ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು):-

47 (59) ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯದ ಬೇಡಿಕೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹೊಸದಾಗಿ ಹಿಂದುಳಿದ ವರ್ಗಗಳ ವಿದ್ಯಾರ್ಥಿ ನಿಲಯಗಳ ಬೇಡಿಕೆ ಎಷ್ಟಿದೆ ;

(ಆ) ರಾಜ್ಯದ ಹಿಂದುಳಿದ ವರ್ಗಗಳ ವಿದ್ಯಾರ್ಥಿ ನಿಲಯಗಳ ನಿರ್ವಹಣೆ ಹಾಗೂ ಸ್ಥಿತಿಗತಿಗಳ ಮಾಹಿತಿ ನೀಡುವುದು;

(ಇ) ತುಮಕೂರು ಜಿಲ್ಲೆಯ ಗಣಿಭಾದಿತ ಪ್ರದೇಶಗಳ ಹಿಂದುಳಿದ ವರ್ಗಗಳ ಜನ ಕಲ್ಯಾಣಕ್ಕಾಗಿ ಸರ್ಕಾರ ಯಾವ ಯೋಜನೆಗಳನ್ನು ಕೈಗೊಳ್ಳಲಾಗಿದೆ ; (ಮಾಹಿತಿ ನೀಡುವುದು)

(ಈ) ರಾಜ್ಯದ ವಿವಿಧ ಭಾಗಗಳ ಹಿಂದುಳಿದ ವರ್ಗಗಳ ಜನಕಲ್ಯಾಣಕ್ಕಾಗಿ ಈ ಮೂರು ವರ್ಷಗಳಿಂದ ಬಿಡುಗಡೆಯಾದ ಅನುದಾನವೆಷ್ಟು; (ಮಾಹಿತಿ ನೀಡುವುದು)

(ಉ) ಡಿ. ದೇವರಾಜು ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದಡಿಯಲ್ಲಿ ಚೈತನ್ಯ ಸ್ವಯಂ ಉದ್ಯೋಗ ನೇರ ಸಾಲ ಯೋಜನೆಯಲ್ಲಿ ನೆರವು ಪಡೆದ ಫಲಾನುಭವಿಗಳೆಷ್ಟು ? (ವಿವರ ನೀಡುವುದು)